(6)

# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 21(161) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಘುನಾಥರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 14-12-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು, ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ತಾಲ್ಲೂಕಿನ ಹೊರ ವಲಯದಲ್ಲಿ ಕಸ ವಿಲೇವಾರಿ ಘಟಕವನ್ನು ಯಾವಾಗ ಸ್ಥಾಪಿಸಲಾಯಿತು; (ಲ್ಯಾಂಡ್ ಫಿಲ್ ಸೈಟ್) ಇದಕ್ಕೆ ತಗುಲಿದ ಹಣವೆಷ್ಟು (ಸ್ಪಷ್ಟ ವಿವರ ನೀಡುವುದು) | • ಬೀದರ್ ನಗರಸಭೆಯ ಘನ ತ್ಯಾಜ್ಯ ವಸ್ತು ನಿರ್ವಹಣೆಗಾಗಿ ಬೀದರ್ ತಾಲ್ಲೂಕಿನ ಹೊರ ವಲಯದಲ್ಲಿ ಸುಲ್ತಾನಪೂರ ಜೆ. ಗ್ರಾಮದ ಸರ್ವೆ ನಂ. 39/ಎ & 39/ಸಿ ರಲ್ಲಿನ 24 ಎಕರೆ 18 ಗುಂಟೆ ಜಮೀನಿನಲ್ಲಿ ಕಸ ವಿಲೇವಾರಿ ಘಟಕವನ್ನು 2004-05ನೇ ಸಾಲಿನಿಂದ ಇಲ್ಲಿಯವರೆಗೆ ಹಂತ ಹಂತವಾಗಿ ಅಭಿವೃದ್ಧಿಪಡಿಸಲಾಗಿದೆ. ಕಾಮಗಾರಿಗಳಿಗೆ ತಗುಲಿದ ವೆಚ್ಚದ ವಿವರಗಳು ಈ ಕೆಳಕಂಡಂತಿರುತ್ತದೆ. |

| ಕ್ರಮ ಸಂಖ್ಯೆ | ಘಟಕಗಳು | ಖರ್ಚು ಮಾಡಲಾದ ಮೊತ್ತ ರೂ ಲಕ್ಷಗಳಲ್ಲಿ |
|---|---|---|
| 1 | 1 ಟನ್ ಸಾಮರ್ಥ್ಯದ ಪ್ಲಾಸ್ಟಿಕ್ ಬೇಲಿಂಗ್ ಯಂತ್ರ | 4.25 |
| 2 | 50 Metric Ton ವೇಯಿಂಗ್ ಬ್ರಿಡ್ಜ್ | 13.65 |
| 3 | 40 TPD ಸ್ಕ್ರೀನಿಂಗ್ ಯಂತ್ರ ಜೊತೆಗೆ ಕನ್ವೇಯರ್ ಬೆಲ್ಟ್ | 40.00 |
| 4 | ಸೆಗ್ರಿಗೇಷನ್ ಯಂತ್ರ | 10.00 |
| 5 | ವಿಂಡ್ರೋ ಪ್ಲಾಟ್‌ಫಾರಂ | 40.00 |
| 6 | ಸಿಸಿ ಚರಂಡಿ, ಲೀಚೆಟ್ ಟ್ಯಾಂಕ್‌ನೊಂದಿಗೆ ನಿರ್ಮಾಣ | 36.00 |
| 7 | ವರ್ಮಿ ಕಾಂಪೋಸ್ಟಿಂಗ್ | 18.00 |
| 8 | ಲೈನರ್, ಲೀಚೆಟ್ ಟ್ಯಾಂಕ್‌ನೊಂದಿಗೆ ಸ್ಯಾನಿಟರಿ ಪಿಟ್ ನಿರ್ಮಾಣ | 50.00 |
| 9 | ನೆಲಭರ್ತಿ ನಿವೇಶನ ಖರೀದಿ | 15.25 |
| 10 | ಸಂಸ್ಕರಣಾ ಜಾಗದ ಸುತ್ತ ಕಾಂಪೌಂಡ್ ನಿರ್ಮಾಣ | 53.75 |
| 11 | ಕಾಂಪೋಸ್ಟಿಂಗ್ ಪ್ಲಾಂಟ್ & ಮಷೀನರಿ | 124.50 |
| 12 | ಆರ್.ಡಿ.ಎಫ್ ಯಂತ್ರ | 27.00 |
| | ಒಟ್ಟು ಮೊತ್ತ | 432.40 |

| | | |
|---|---|---|
| ಆ | ಹಾಗಿದ್ದಲ್ಲಿ, ಈ ಘಟಕದ ಯಂತ್ರೋಪಕರಣಗಳು ಯಾವ ಕಂಪನಿಯದಾಗಿದೆ ಹಾಗೂ ಈ ಯಂತ್ರವನ್ನು ಟೆಂಡರ್ ಮೂಲಕ ಖರೀದಿಸಲಾಗಿದೆಯೇ; ಖರೀದಿಸಿದಲ್ಲಿ ಪ್ರಕ್ರಿಯೆ ಪ್ರತಿಯೊಂದಿಗೆ ವಿವರ ನೀಡುವುದು | • ಸದರಿ ಘಟಕದಲ್ಲಿ ಟೆಂಡರ್ ಪ್ರಕ್ರಿಯೆ ಹಾಗೂ ನಿರ್ಮಿತಿ ಕೇಂದ್ರದ ಮೂಲಕ ಸ್ಥಾಪಿಸಿರುವ ಯಂತ್ರಗಳ ವಿವರಗಳನ್ನು **ಅನುಬಂಧ**-1 ರಲ್ಲಿ ನೀಡಲಾಗಿದೆ. |
| ಇ | ಈ ಘಟಕದಿಂದ ಸುತ್ತಮುತ್ತಲಿನ ಸುಮಾರು ಗ್ರಾಮಗಳ ಗ್ರಾಮಸ್ಥರಿಗೆ ದುರ್ವಾಸನೆ ಮತ್ತು ಆರೋಗ್ಯದ ಮೇಲೆ ತೊಂದರೆಯಾಗುತ್ತಿರುವ ಬಗ್ಗೆ ಸರ್ಕಾರದ ಗಮನಕ್ಕೆ ಮತ್ತು ಅಧಿಕಾರಿಗಳ ಗಮನಕ್ಕೆ ತಂದಿದ್ದರೂ ಸಹ ಈ ತೊಂದರೆಗಳನ್ನು ನಿಯಂತ್ರಿಸಲು ಸರ್ಕಾರ ಕೈಗೂಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಈ ಘಟಕದಿಂದ ಸುತ್ತಮುತ್ತಲಿನ ಗ್ರಾಮಸ್ಥರಿಗೆ ಹಾಗೂ ಸಾರ್ವಜನಿಕರಿಗೆ ಆಗಬಹುದಾದಂತಹ ತೊಂದರೆಗಳನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಕಸ ವಿಲೇವಾರಿ ಘಟಕದಲ್ಲಿ 8 ಅಡಿ ಸುತ್ತುಗೋಡೆ ಮತ್ತು 3 ಅಡಿ ಫೆನ್ಸ್ ನಿರ್ಮಾಣ ಮಾಡಲಾಗಿದೆ.<br>2. ಘಟಕದ ಸುತ್ತಲೂ ಸುಮಾರು 500 ಗಿಡಗಳನ್ನು ನೆಡಲಾಗಿದೆ.<br>3. ಪ್ರತಿ ದಿನ 40 ಟನ್ ನಷ್ಟು ಹಸಿ ತ್ಯಾಜ್ಯ ಸಂಗ್ರಹವಾಗುತ್ತಿದ್ದು, ಅದನ್ನು ಘನತ್ಯಾಜ್ಯ ವಿಲೇವಾರಿ ಘಟಕದಲ್ಲಿ Windrow composting ವಿಧಾನದ ಮೂಲಕ ಸಂಸ್ಕರಣೆ ಮಾಡಲಾಗುತ್ತಿದ್ದು, ಅದರ ದುರ್ವಾಸನೆ ತಡೆಗಟ್ಟಲು ಹಸಿ ಕಸದ ಮೇಲೆ ಬಯೋ-ಕಲ್ಚರ್ ದ್ರಾವಣವನ್ನು ಸಿಂಪಡಿಸಲಾಗುತ್ತಿದೆ. ಇದರಿಂದ ಉತ್ಪನ್ನವಾಗುವ ಗೊಬ್ಬರವನ್ನು ಮಾರಾಟ ಮಾಡಲಾಗುತ್ತಿದೆ.<br>4. ಪ್ರತಿ ದಿನ 5 ಟನ್‌ನಷ್ಟು ಒಣತ್ಯಾಜ್ಯವನ್ನು ಬೇರ್ಪಡಿಸಿ, ಬೇಲಿಂಗ್ ಮಾಡಲಾಗುತ್ತಿದೆ.<br>5. ನಿಸ್ಸತ್ವ ತ್ಯಾಜ್ಯವನ್ನು ವೈಜ್ಞಾನಿಕವಾಗಿ ವಿಲೇವಾರಿ ಮಾಡಲು ಸ್ಯಾನಿಟರಿ ಲ್ಯಾಂಡ್‌ಫಿಲ್ ಸೌಲಭ್ಯವನ್ನು ಅಭಿವೃದ್ಧಿ ಪಡಿಸಲಾಗಿದೆ.<br>6. ತ್ಯಾಜ್ಯ ವಿಲೇವಾರಿ ಘಟಕದಲ್ಲಿ ಶೇಖರಣೆಯಾಗಿರುವ ಹಳೆಯ ತ್ಯಾಜ್ಯವನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯ ರೀತ್ಯಾ ಸಂಸ್ಕರಿಸಿ ವಿಲೇವಾರಿ ಮಾಡಲು EoI ಆಹ್ವಾನಿಸಲಾಗಿದ್ದು, ಸದರಿ ಕಾಮಗಾರಿಯನ್ನು ಖಾಸಗಿ ಸಂಸ್ಥೆಗೆ ನಿಯಮಾನುಸಾರ ವಹಿಸಲು ಕ್ರಮವಹಿಸಲಾಗುತ್ತಿದೆ.<br>7. ಬೀದರ್ ನಗರಸಭೆ ವ್ಯಾಪ್ತಿಯಲ್ಲಿ ಉತ್ಪಾದನೆಯಾಗುವ ಘನತ್ಯಾಜ್ಯವನ್ನು ಪೂರ್ಣ ಪ್ರಮಾಣದಲ್ಲಿ ಸಂಸ್ಕರಣೆ ಮಾಡಲು ಅಗತ್ಯವಿರುವ ಹೆಚ್ಚುವರಿ ಮೂಲಭೂತ ಸೌಲಭ್ಯಗಳನ್ನು ಪ್ರಸ್ತಾಪಿಸಿ ರೂ. 976.76 ಲಕ್ಷಗಳ ಬಂಡವಾಳ ಮೊತ್ತದ ಯೋಜನಾ ವರದಿಗೆ ಸ್ವಚ್ಛ ಭಾರತ ಮಿಷನ್ ಅಡಿ ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ. ಸದರಿ ಯೋಜನಾ ವರದಿಯಲ್ಲಿ ಪ್ರಸ್ತಾಪಿಸಿರುವ ವಾಹನ ಯಂತ್ರೋಪಕರಣಗಳನ್ನು ಖರೀದಿಸಲಾಗಿದ್ದು, ಉಳಿಕೆ ರೂ 5.11 ಕೋಟಿಗಳ ಸಿವಿಲ್ ಕಾಮಗಾರಿಗಳ ಟೆಂಡರ್, ಮೌಲ್ಯಮಾಪನ ಹಂತದಲ್ಲಿರುತ್ತದೆ.<br>8. ಘನತ್ಯಾಜ್ಯ ವಿಲೇವಾರಿ ಘಟಕದಿಂದ ಸಾರ್ವಜನಿಕರಿಗೆ ಯಾವುದೇ ತೊಂದರೆಯಾಗದ ರೀತಿಯಲ್ಲಿ ನಗರಸಭೆಯಿಂದ ಎಲ್ಲಾ ಅಗತ್ಯ ಕ್ರಮವಹಿಸಲಾಗುತ್ತಿದೆ. |

| | | |
|---|---|---|
| ಈ | ಈ ಘಟಕದಿಂದ ಇಲ್ಲಿಯವರೆಗೆ ಎಷ್ಟು ಪ್ರಮಾಣದಲ್ಲಿ 'ಗೊಬ್ಬರ' ತಯಾರಿಸಲಾಗಿದೆ ಹಾಗು ಮಾರಾಟದಿಂದ ಸರ್ಕಾರಕ್ಕೆ ಬಂದಿರುವ ಆದಾಯವೆಷ್ಟು? (ವರ್ಷವಾರು ವಿವರ ನೀಡುವುದು) | • ಘಟಕವು 2018 ರಿಂದ ಕಾರ್ಯಾರಂಭ ಮಾಡಿದ್ದಾಗ್ಯೂ, 2019-20 ರಿಂದ ಗೊಬ್ಬರ ಉತ್ಪಾದನೆಯನ್ನು ಪ್ರಾರಂಭಿಸಿದ್ದು, ಉತ್ಪಾಧಿಸಲಾದ 15 ಟನ್ ಗೊಬ್ಬರವನ್ನು ನಗರಸಭೆ ಉದ್ಯಾನವನಗಳಲ್ಲಿ ಉಪಯೋಗಿಸಲಾಗಿರುತ್ತದೆ. ಮುಂದುವರೆದು 2020-21ನೇ ಸಾಲಿನಲ್ಲಿ ಅಂದಾಜು 140 ಟನ್ ಗೊಬ್ಬರವನ್ನು ಉತ್ಪಾದಿಸಿ, ಶ್ರೀ ಸಾಯಿ ಬಯೋ ಆಗ್ರ್ಯಾನಿಕ್ ಹೈದರಾಬಾದ್ ರವರಿಗೆ ರೂ. 85,000/- ಕ್ಕೆ ಮಾರಾಟ ಮಾಡಲಾಗಿರುತ್ತದೆ. ನಂತರ 200 ಟನ್ ಗೊಬ್ಬರ ಸಂಸ್ಕರಿಸಲಾಗಿದ್ದು ಅತೀ ಶೀಘ್ರದಲ್ಲಿ ಮಾರಾಟ ಮಾಡಲು ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ: ನಅಇ 209 ಸಿಎಸ್‌ಎಸ್ 2021

[ಎನ್. ನಾಗರಾಜ್ (ಎಂ.ಟಿ.ಬಿ.)]
ಪೌರಾಡಳಿತ, ಸಣ್ಣ ಕೈಗಾರಿಕೆ, ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

## ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 161ಕ್ಕೆ ಅನುಬಂಧ-1

| ಕ್ರ. ಸಂ | ಅನುದಾನದ ವಿವರ | ಖರೀದಿಸಿರುವ ವರ್ಷ | ಯಂತ್ರದ ಹೆಸರು | ಟೆಂಡರ್ ಕರೆದಿರುವ ದಿನಾಂಕ | ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದಿರುವ ಏಜೆನ್ಸಿಗಳ ಹೆಸರು | ಕಾರ್ಯಾದೇಶ ನೀಡಿರುವ ದಿನಾಂಕ | ಅಂತಿಮ ಗೊಂಡ ಏಜನ್ಸಿಯ ಹೆಸರು | ಖರೀದಿಸಿದ ಮೊತ್ತ |
|---|---|---|---|---|---|---|---|---|
| 1 | 13ನೇ ಹಣಕಾಸು ಯೋಜನೆ (ಜಿಬಿಜಿ) | 2017–18 | 1 Ton ಪ್ಲಾಸ್ಟಿಕ್ ಬೇಲಿಂಗ್ ಯಂತ್ರ | 10/02/2017 | ರೇ ಇಂಜಿನಿಯರಿಂಗ್ ವರ್ಕ್ಸ್ ಬೆಳಗಾವಿ<br>ಸಾಧನ ಎನ್ವಿರೋ ಇಂಜಿನಿಯರ್ ಸರ್ವೀಸಸ್ | 14/07/2017 | ರೇ ಇಂಜಿನಿಯರಿಂಗ್ ವರ್ಕ್ಸ್ ಬೆಳಗಾವಿ | 4.25 ಲಕ್ಷ |
| 2 | 13ನೇ ಹಣಕಾಸು ಯೋಜನೆ (ಜಿಬಿಜಿ) 2014–15 | 2017–18 | 50 Metric Ton ವೇಯಿಂಗ್ ಬ್ರಿಡ್ಜ್ | 08/01/2018 | ಮೇಟ್‌ವೇ ಇಂಡಿಯಾ<br>ರೇ ಇಂಜಿನಿಯರಿಂಗ್ ವರ್ಕ್ಸ್ ಬೆಳಗಾವಿ | 22/02/2018 | ಮೇಟ್ ವೇ ಇಂಡಿಯಾ | 13.65 ಲಕ್ಷ |
| 3 | 2015–16 ನೇ ಸಾಲಿನ ಎಸ್.ಎಫ್.ಸಿ (ಮುಕ್ತನಿಧಿ) | 2016–17 | 40 TPD ಸ್ಕ್ರೀನಿಂಗ್ ಯಂತ್ರ ಜೊತೆಗೆ ಕನ್ವೇಯರ್ ಬೆಲ್ಟ್ | Direct entrustment work order date: 10-11-2016 | | | ನಿರ್ಮಿತಿ ಕೇಂದ್ರ ಬೀದರ್ | 40.00 ಲಕ್ಷ |
| 4 | ಎಸ್.ಎಫ್.ಸಿ (ಮುಕ್ತನಿಧಿ) 2013–14 | 2013–14 | ಸೇಗ್ರಿಗೇಷನ್ ಯಂತ್ರ | Direct entrustment work order date:-22/03/2014 | | | ನಿರ್ಮಿತಿ ಕೇಂದ್ರ ಬೀದರ್ | 10.00 ಲಕ್ಷ |
| 5 | 14ನೇ ಹಣಕಾಸು (2019–20) | 2020–21 | ಕಂಪೋಸ್ಟಿಂಗ್ ಪ್ಲಾಂಟ್ & ಮಷೀನರಿ | | 1) M/s Jalota Business support Service LLP<br>2) M/s Kayaka Waste Management Solution<br>3) M/s New Sai Fibers | 09-06-2021 | M/s Jalota Business support Service LLP | 124.50 ಲಕ್ಷ |
| 6 | 14ನೇ ಹಣಕಾಸು (2019–20) | 2020–21 | ಆರ್.ಡಿ.ಎಫ್ ಯಂತ್ರ | | 1) M/s Jalota Business support Service LLP<br>2) M/s Kayaka Waste Management Solution<br>3) Sadhana Enviro Engineer Services | 09-06-2021 | M/s Jalota Business support Service LLP | 27.00 ಲಕ್ಷ |